# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 358 (338) |
| ಉತ್ತರಿಸುವ ದಿನಾಂಕ | 15–12–2021 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕೆ.ವಿ.ನಾರಾಯಣಸ್ವಾಮಿ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಡಾ|| ಕೆ.ಶಿವರಾಮಕಾರಂತ ಬಡಾವಣೆಗಾಗಿ ಅಧಿಸೂಚನೆ ಹೊರಡಿಸಿರುವ ಗ್ರಾಮಗಳಲ್ಲಿ, ಅಧಿಸೂಚನೆಯಲ್ಲಿ ಸೇರ್ಪಡೆಯಾಗದ ಮನೆ, ನಿವೇಶನಗಳನ್ನು ಸಹ ನೋಂದಣಿ ಮಾಡದಂತೆ ಉಪನೋಂದಣಾಧಿಕಾರಿಗಳಿಗೆ ಸೂಚನೆ/ಆದೇಶ ನೀಡಲಾಗಿದೆಯೇ; (ನೀಡಲಾಗಿದ್ದಲ್ಲಿ ಅದರ ಪ್ರತಿಯನ್ನು ನೀಡುವುದು) | ಡಾ|| ಕೆ.ಶಿವರಾಮಕಾರಂತ ಬಡಾವಣೆಗಾಗಿ ಅಧಿಸೂಚನೆ ಹೊರಡಿಸಿರುವ ಗ್ರಾಮಗಳಲ್ಲಿ, ಅಧಿಸೂಚನೆಯಲ್ಲಿ ಸೇರ್ಪಡೆಯಾಗದ ಮನೆ, ನಿವೇಶನಗಳನ್ನು ಸಹ ನೋಂದಣಿ ಮಾಡದಂತೆ ಉಪ ನೋಂದಣಾಧಿಕಾರಿಗಳಿಗೆ ಸೂಚನೆ/ಆದೇಶ ನೀಡಲಾಗಿದೆ. ಸದರಿ ಪ್ರತಿಯನ್ನು ಅನುಬಂಧದಲ್ಲಿ ಸಲ್ಲಿಸಿದೆ. |
| ಆ | ಬೆಂಗಳೂರು ಉತ್ತರ ತಾಲ್ಲೂಕಿನ ಮಾದನಾಯಕನಹಳ್ಳಿ ಮತ್ತು ಪೀಣ್ಯ ಉಪನೋಂದಣಾಧಿಕಾರಿಗಳ ಕಾರ್ಯಾಲಯದಲ್ಲಿ ಅಧಿಸೂಚನೆಯಲ್ಲಿ ಸೇರ್ಪಡೆಯಾಗದ ಮನೆ ಮತ್ತು ನಿವೇಶನಗಳನ್ನು ಸಹ ನೋಂದಣಿ ಮಾಡದೆ ತಿರಸ್ಕರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಇದರ ಪರಿಹಾರಕ್ಕೆ ಸರ್ಕಾರ ಕೈಗೊಂಡ ಕ್ರಮವೇನು: | ಬೆಂಗಳೂರು ಉತ್ತರ ತಾಲ್ಲೂಕಿನ ಮಾದನಾಯಕನಹಳ್ಳಿ ಮತ್ತು ಪೀಣ್ಯ ಉಪ ನೋಂದಣಾಧಿಕಾರಿಗಳ ಕಾರ್ಯಾಲಯದಲ್ಲಿ ಅಧಿಸೂಚನೆಯಲ್ಲಿ ಸೇರ್ಪಡೆಯಾಗದ ಮನೆ ಮತ್ತು ನಿವೇಶನಗಳನ್ನು ಸಹ ನೋಂದಣಿ ಮಾಡದೆ ತಿರಸ್ಕರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಇ | ಅಧಿಸೂಚನೆಯಲ್ಲಿರುವ ಸ್ವತ್ತುಗಳನ್ನು ನೋಂದಣಿ ಮಾಡದಿರುವುದರಿಂದ ಸಾರ್ವಜನಿಕರಿಗೆ ತೊಂದರೆಯುಂಟು ಮಾಡಿದಂತಾಗುವುದಿಲ್ಲವೆ; ಮತ್ತು ಸರ್ಕಾರದ ಬೊಕ್ಕಸಕ್ಕೆ ನಷ್ಟವುಂಟು ಮಾಡಿದಂತೆ ಅಲ್ಲವೇ; | ಹೌದು<br>ಆದರೆ ಶಿವರಾಮ ಕಾರಂತ್ ಬಡಾವಣೆಗೆ ಭೂಸ್ವಾಧೀನಪಡಿಸಿಕೊಂಡಿರುವ ಗ್ರಾಮಗಳಲ್ಲಿ ಭೂಸ್ವಾಧಿನಪಡಿಸಿಕೊಂಡಿರುವ ಸ್ವತ್ತುಗಳನ್ನು ನೋಂದಾಯಿಸುವುದನ್ನು ತಡೆಗಟ್ಟಲು ಕ್ರಮಕೈಗೊಳ್ಳಲಾಗಿದೆ. |
| ಈ | ಅಧಿಸೂಚನೆಯಲ್ಲಿ ಸೇರ್ಪಡೆಯಾಗದ ಸ್ವತ್ತುಗಳ ನೋಂದಣಿ ಮಾಡದ ಸಾರ್ವಜನಿಕರಿಗೆ ತೊಂದರೆಯುಂಟು ಮಾಡುವ ಅಧಿಕಾರಿಗಳ ಮೇಲೆ ಸರ್ಕಾರ ಕ್ರಮ ಕೈಗೊಳ್ಳುವ ಕ್ರಮವೇನು; | ಸ್ವತ್ತುಗಳ ಖಾತಾ ನಂಬರ್‌ಗಳನ್ನು ನಮೂದಿಸಿ ನೋಂದಾಯಿಸಲಾಗುತ್ತಿರುವುದರಿಂದ ಭೂ ಸ್ವಾಧೀನಪಡಿಸಿಕೊಂಡಿರುವ ಸ್ವತ್ತುಗಳು ಸಹ ಭೂಸ್ವಾಧೀನಪಡಿಸಿಕೊಂಡಿಲ್ಲದ ಸ್ವತ್ತುಗಳೆಂದು ನೋಂದಾಯಿಸುವ ಸಂಭವವಿರುವುದರಿಂದ ಕ್ರಮಕೈಗೊಳ್ಳಲಾಗಿದೆ. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಉ | ದಿನಾಂಕ: 01-08-2021 ರಿಂದ ಇಲ್ಲಿಯವರೆಗೆ ಮಾದನಾಯಕನಹಳ್ಳಿ ಮತ್ತು ಪೀಣ್ಯ ಉಪನೋಂದಣಾಧಿಕಾರಿಗಳ ಕಾರ್ಯಾಲಯದಲ್ಲಿ ನೋಂದಣಿಯಾದ ಸೋಮಶೆಟ್ಟಿಹಳ್ಳಿ, ಗಾಣಿಗರಹಳ್ಳಿ ಮತ್ತು ಲಕ್ಷ್ಮೀಪುರ ಗ್ರಾಮಗಳ ಸ್ವತ್ತುಗಳ ಸಂಖ್ಯೆ ಎಷ್ಟು? (ಗ್ರಾಮವಾರು ಕಾರ್ಯಾಲಯವಾರು ಪ್ರತ್ಯೇಕವಾಗಿ ನೀಡುವುದು) | ಮಾದನಾಯಕನಹಳ್ಳಿ ಉಪ ನೋಂದಣಿ ಕಛೇರಿಯಲ್ಲಿ ಸದರಿ ಗ್ರಾಮಗಳಿಗೆ ಸಂಬಂಧಿಸಿದಂತೆ ಯಾವುದೇ ಸ್ವತ್ತು ನೋಂದಣಿಯಾಗಿರುವುದು ಕಂಡುಬಂದಿರುವುದಿಲ್ಲ.<br><br>ದಿನಾಂಕ: 01-08-2021 ರಿಂದ 16-08-2021 ರವರೆಗೆ ಪೀಣ್ಯ ಉಪ ನೋಂದಣಿ ಕಛೇರಿಯಲ್ಲಿ ಸದರಿ ಗ್ರಾಮಗಳಲ್ಲಿ ಭೂ ಸ್ವಾಧೀನ ಪ್ರಕ್ರಿಯೆಗೆ ಒಳಪಡದೇ ಇರುವ ಸ್ವತ್ತುಗಳನ್ನು ಗಾಣಿಗರಹಳ್ಳಿ-01, ಸೋಮ ಶೆಟ್ಟಿಹಳ್ಳಿ-01 ಮತ್ತು ಲಕ್ಷ್ಮೀಪುರ-16ರಂತೆ ಒಟ್ಟು 18 ದಸ್ತಾವೇಜುಗಳು ನೋಂದಣಿಯಾಗಿರುವುದಾಗಿ ಹಾಗೂ ದಿನಾಂಕ:30-08-2021 ರಿಂದ ಸದರಿ ಗ್ರಾಮಗಳಿಗೆ ಸಂಬಂಧಿಸಿದ ಯಾವುದೇ ದಸ್ತಾವೇಜುಗಳು ನೋಂದಣಿಯಾಗಿರುವುದಿಲ್ಲ. |

ಸಂಖ್ಯೆ: ಕಂಇ/570/ಎಂಎನ್‌ಎಸ್‌ಎ/2021

(ಆರ್.ಅಶೋಕ)
ಕಂದಾಯ ಸಚಿವರು

ಅನುಬಂಧ

ಕರ್ನಾಟಕ ಸರ್ಕಾರ
ನೋಂದಣಿ ಮತ್ತು ಮುದ್ರಾಂಕ ಇಲಾಖೆ

ಸಂಖ್ಯೆ:RGN/163/2021-22

ನೋಂದಣಿ ಮಹಾ ಪರಿವೀಕ್ಷಕರು ಮತ್ತು
ಮುದ್ರಾಂಕಗಳ ಆಯುಕ್ತರವರ ಕಛೇರಿ,
ಕಂದಾಯ ಭವನ, 8ನೇ ಮಹಡಿ,
ಕೆ.ಜಿ.ರಸ್ತೆ, ಬೆಂಗಳೂರು-09
ದಿನಾಂಕ:30-08-2021

ಜ್ಞಾಪನ

ವಿಷಯ:-ಡಾ|| ಶಿವರಾಂಕಾರಂತ್ ಲೇಔಟ್ ಗೆ ಸಂಬಂಧಿಸಿದಂತೆ ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾದ Special Leave Petition Civil No.10100-10166/2018 ರಲ್ಲಿ ದಿನಾಂಕ:29-07-2021. ನೀಡಿರುವ ಆದೇಶದ ಕುರಿತು.

ಉಲ್ಲೇಖ:-1. ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾದ Special Leave Petition Civil No.10100-10166/2018 ದಿನಾಂಕ:29-07-2021. ರಂದು ನೀಡಿರುವ ಆದೇಶ.

2. The Karnataka Land (Restriction on Transfer ) Act 1991.
3. ಆಯುಕ್ತರು, ಬೆಂಗಳೂರು ಪ್ರಾಧಿಕಾರ ರವರ ಪತ್ರ ಸಂಖ್ಯೆ:ಬೆಂಅಪ್ರಾ/ಆ/29/2021-22 ದಿನಾಂಕ:29-07-2021.
4. ಈ ಕಛೇರಿಯ ಸಮ ಸಂಖ್ಯೆಯ ಜ್ಞಾಪನ ಪತ್ರ ದಿನಾಂಕ:16-08-2021.
5. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ರವರ ಪತ್ರ ಸಂಖ್ಯೆ:ಆರ್‌ಡಿ 106 ಎಂಎನ್‌ಎನ್/2021 ದಿನಾಂಕ:27-08-2021.

*******

ಪ್ರಸ್ತಾವಿತ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖ (1)ರ ಆದೇಶದಲ್ಲಿ ಈ ಕೆಳಕಂಡಂತೆ ಮಾನ್ಯ ಸರ್ವೋಚ್ಚ ನ್ಯಾಯಾಲಯವು ಆದೇಶಿಸಿರುತ್ತದೆ.

"After the Supreme Court judgement dated:03-08-2018, sites are being registered by the Sub-Registrar in Dr.K.Shivaram Karanth Layout. The Court Directed that one senior officer i.e, District Registrar be deputed to find as to whether the sites are being registrar in Dr.Shivarama Karanth Layout now. The Principal Secretary to Government, Revenue Department to file a compliance affidavit in FIFTEEN DAYS stating how many sites were registered after the judgement of the Supreme Court dated:03-08-2018 if any. If it is found that the Sub Registrar is still registering the sale deeds in respect of sites in Dr.Shivaram Karanth Layout, then the Court orally directed that the said Sub Registrar should be transferred forthwith" ಎಂದಿರುತ್ತದೆ.

ಮಾನ್ಯ ಸರ್ವೋಚ್ಚ ನ್ಯಾಯಾಲಯದ ದಿನಾಂಕ 03-08-2018ರ ಆದೇಶದನ್ವಯ ಡಾ|| ಶಿವರಾಂಕಾರಂತ್ ಬಡಾವಣೆಗೆ ಭೂಸ್ವಾಧೀನ ಪಡಿಸಿಕೊಂಡು ಅಂತಿಮ ಅಧಿಸೂಚನೆ ಸಂಖ್ಯೆ: [illegible] ದಿನಾಂಕ:30-10-2018 [illegible]ರುತ್ತಾರೆ.

ಉಲ್ಲೇಖ (2)ರ The Karnataka Land (Restriction on Transfer ) Act 1991 ಅಧಿನಿಯಮದ ಕಲಂ 3, 4 ಮತ್ತು 8 ರನ್ವಯ ಭೂ ಸ್ವಾಧೀನಕ್ಕೆ ಒಳಪಟ್ಟ ಸ್ವತ್ತನ್ನು ಸಕ್ಷಮ ಪ್ರಾಧಿಕಾರದಿಂದ ಪೂರ್ವಾನುಮತಿ ಪಡೆಯದೆ ಕ್ರಯ, ಆಧಾರ, ದಾನ ಮತ್ತು ಲೀಸ್ ಅಥವಾ ಇನ್ನಿತರೆ ಯಾವುದೇ ದಸ್ತಾವೇಜುಗಳನ್ನು ನೋಂದಣಿ ಅಧಿಕಾರಿಗಳು ನೋಂದಾಯಿಸದೇ ಇರುವ ಕಾನೂನಿನ ಉಪಬಂಧ ಈಗಾಗಲೇ ಇರುತ್ತದೆ.

ಸರ್ಕಾರದ ಸುತ್ತೋಲೆ ಸಂಖ್ಯೆ:ಕಂಇ 344 ಮುನೋಮು 2008 ದಿನಾಂಕ:06-04-2009ರಲ್ಲಿ ದಸ್ತಾವೇಜುಗಳ ನೋಂದಣಿಯ ಮೇಲೆ ಪರಿಣಾಮ ಹೊಂದಿರುವ ರಾಜ್ಯ/ಕೇಂದ್ರ ಶಾಸನಗಳ ಉಪಬಂಧಗಳಲ್ಲಿ ಕರ್ನಾಟಕ ಭೂ (ಪರಭಾರೆ ನಿರ್ಭಂದ) ಕಾಯ್ದೆ 1991ರ ಕಲಂ 8 ಅನ್ನು ಉಲ್ಲೇಖಿಸಲಾಗಿದೆ.

ಅಲ್ಲದೇ ಉಲ್ಲೇಖ (3)ರಲ್ಲಿ ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ರವರು ದಿನಾಂಕ: 03-08-2018ರ ನಂತರ ಡಾ॥ ಶಿವರಾಂಕಾರಂತ್ ಬಡಾವಣೆಯ ವ್ಯಾಪ್ತಿಯಲ್ಲಿ ಬರುವ ಬೆಂಗಳೂರು ಉತ್ತರ ತಾಲ್ಲೂಕು ಮತ್ತು ಬೆಂಗಳೂರು ಉತ್ತರ ತಾಲ್ಲೂಕು (ಅಪರ) ಗಳಲ್ಲಿನ ಸೋಮಶೆಟ್ಟಿಹಳ್ಳಿ, ಲಕ್ಷ್ಮೀಪುರ, ಗಾಣಿಗರಹಳ್ಳಿ, ಬ್ಯಾಲಕೆರೆ, ಕಾಳತಮ್ಮನಹಳ್ಳಿ, ಗುಣಿಅಗ್ರಹಾರ, ಕೆಂಪಾಪುರ, ಮೇಡಿಅಗ್ರಹಾರ, ಆವಲಹಳ್ಳಿ, ವಡೇರಹಳ್ಳಿ, ರಾಮಗೊಂಡನಹಳ್ಳಿ, ಕೆಂಪನಹಳ್ಳಿ, ವೀರಸಾಗರ, ದೊಡ್ಡಬೆಟ್ಟಹಳ್ಳಿ, ಹಾರೋಹಳ್ಳಿ, ಶ್ಯಾಮರಾಜಪುರ ಮತ್ತು ಜಾರಕಬಂಡೆಕಾವಲ್ ಗ್ರಾಮಗಳಲ್ಲಿ ಭೂ ಸ್ವಾಧೀನಕೊಳ್ಳಪಟ್ಟಿರುವ ಜಮೀನು/ರೆವೆನ್ಯೂ ನಿವೇಶನಗಳನ್ನು ಪ್ರಾಧಿಕಾರದಪೂರ್ವಾನುಮತಿಯಿಲ್ಲದೇ ನೋಂದಣಿ ಮಾಡಬಾರದೆಂದು ಸೂಚಿಸಿದ್ದು ಹಾಗೂ ಸಂಬಂಧಪಟ್ಟ ಉಪನೋಂದಣಾಧಿಕಾರಿಗಳಿಗೆ ಕಟ್ಟುನಿಟ್ಟಿನ ಆದೇಶ ನೀಡಲು ಕೋರಿರುತ್ತಾರೆ.

ಈ ಸಂಬಂಧ ಡಾ॥ ಶಿವರಾಂಕಾರಂತ್ ಬಡಾವಣೆಗೆ ಭೂ ಸ್ವಾಧೀನ ಪಡಿಸಿಕೊಂಡಿರುವ ಸ್ವತ್ತುಗಳ ಮಾಹಿತಿಯನ್ನು ಲಗತ್ತಿಸಿ ಕಳುಹಿಸುತ್ತಾ, ಸದರಿ ಅಧಿಸೂಚನೆಯಲ್ಲಿ ಬರುವ ಬೆಂಗಳೂರು ಉತ್ತರ ತಾಲ್ಲೂಕು ಮತ್ತು ಬೆಂಗಳೂರು ಉತ್ತರ ತಾಲ್ಲೂಕು (ಅಪರ) ಗಳಲ್ಲಿನ ಗ್ರಾಮಗಳಲ್ಲಿ ಬರುವ ಸ್ವತ್ತುಗಳಿಗೆ ಸಂಬಂಧಿಸಿದಂತೆ ಉಲ್ಲೇಖ (2)ರ ಅಧಿನಿಯಮ The Karnataka Land (Restriction on Transfer) Act 1991 ರ ಕಲಂ 3, 4 ಮತ್ತು 8 ರನ್ವಯ ಭೂ ಸ್ವಾಧೀನಕ್ಕೆ ಒಳಪಟ್ಟ ಸ್ವತ್ತನ್ನು ಸಕ್ಷಮ ಪ್ರಾಧಿಕಾರದಿಂದ ಪೂರ್ವಾನುಮತಿ ಪಡೆಯದೆ ಕ್ರಯ, ಆಧಾರ, ದಾನ ಮತ್ತು ಲೀಸ್ ಅಥವಾ ಇನ್ನಿತರೆ ಯಾವುದೇ ದಸ್ತಾವೇಜುಗಳನ್ನು ನೋಂದಣಿ ಅಧಿಕಾರಿಗಳು ನೋಂದಾಯಿಸದೇ ಇರುವ ಕಾನೂನಿನ ಉಪಬಂಧ ಈಗಾಗಲೇ ಇರುತ್ತದೆ.

ಆದಾಗ್ಯೂ, ಉಲ್ಲೇಖ (3) ರಲ್ಲಿ ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ರವರು ಡಾ॥ ಶಿವರಾಂ ಕಾರಂತ್ ಬಡಾವಣೆಗೆ ಸಂಬಂಧಿಸಿದ ಮೇಲಿನ ಗ್ರಾಮಗಳಲ್ಲಿ ಭೂಸ್ವಾಧೀನಕೊಳ್ಳಪಟ್ಟಿರುವ ಜಮೀನು/ರೆವೆನ್ಯೂ ನಿವೇಶನಗಳನ್ನು ಪ್ರಾಧಿಕಾರದ ಪೂರ್ವಾನುಮತಿಯಿಲ್ಲದೇ ನೋಂದಣಿ ಮಾಡಬಾರದೆಂದು ಸೂಚಿಸಿರುವುದರಿಂದ, ಮತ್ತೊಮ್ಮೆ ಸದರಿ ಭೂ ಸ್ವಾಧೀನಕೊಳ್ಳಪಟ್ಟಿರುವ ಸ್ವತ್ತುಗಳಿಗೆ ಸಂಬಂಧಿಸಿದ ಯಾವುದೇ ರೀತಿಯ ದಸ್ತಾವೇಜುಗಳನ್ನು ನೋಂದಾಯಿಸದೇ ಇರಲು ಉಲ್ಲೇಖ (4)ರನ್ವಯ ರಾಜ್ಯದ ಎಲ್ಲಾ ಉಪನೋಂದಣಾಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ.

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ರವರು ಉಲ್ಲೇಖ (5)ರ ಪತ್ರದಲ್ಲಿ ಡಾ॥ ಶಿವರಾಂ ಕಾರಂತ್ ಬಡಾವಣೆಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ರವರು ಭೂ ಸ್ವಾಧೀಪಡಿಸಿಕೊಂಡಿರುವ ಅಧಿಸೂಚನೆ ಸಂಖ್ಯೆ:ಯುಡಿಡಿ/553/ಎಂಎನ್‌ಎಕ್ಸ್/2018 ದಿನಾಂಕ:30-10-2018 ರಲ್ಲಿನ ಗ್ರಾಮಗಳಿಗೆ ಸಂಬಂಧಿಸಿದ ಯಾವುದೇ ನಿವೇಶನ ಅಥವಾ ಸ್ವತ್ತುಗಳನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ರವರ ಪೂರ್ವಾನುಮತಿ ಪಡೆಯದೇ ಯಾವುದೇ ದಸ್ತಾವೇಜುಗಳನ್ನು ನೋಂದಾಯಿಸದೇ ಇರಲು ಉಪನೋಂದಣಾಧಿಕಾರಿಗಳಿಗೆ ನಿರ್ದೇಶನ ನೀಡಲು ಸೂಚಿಸಿ, ಸದರಿ ನಿರ್ದೇಶನವು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ರವರು ಸದರಿ ಡಾ॥ ಶಿವರಾಂ ಕಾರಂತ್ ಬಡಾವಣೆಗೆ ಭೂ ಸ್ವಾಧೀನ ಪಡಿಸಿಕೊಂಡಿರುವ ಸ್ವತ್ತುಗಳಿಗೆ ಸಂಬಂಧಿಸಿದ ಖಾತ ಸಂಖ್ಯೆ ಅಥವಾ [illegible] ಸಂಖ್ಯೆ ನೀಡಿರುವ ಸ್ವತ್ತುಗಳ ಮಾಹಿತಿಯನ್ನು ಸಲ್ಲಿಸುವವರೆಗೂ ಜಾರಿಯಲ್ಲಿರುವುದಾಗಿ ತಿಳಿಸಿರುತ್ತಾರೆ.

ಆದ್ದರಿಂದ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ರವರ ಉಲ್ಲೇಖ (5)ರ ಪತ್ರದಲ್ಲಿನ ನಿರ್ದೇಶನದಂತೆ ಸದರಿ ಡಾ|| ಶಿವರಾಂ ಕಾರಂತ್ ಬಡಾವಣೆಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ರವರು ಭೂ ಸ್ವಾಧೀಪಡಿಸಿಕೊಂಡಿರುವ ಅಧಿಸೂಚನೆ ಸಂಖ್ಯೆ:ಯುಡಿಡಿ/553/ಎಂಎನ್ಎಕ್ಸ್/2018 ದಿನಾಂಕ:30-10-2018 ರಲ್ಲಿನ ಗ್ರಾಮಗಳಿಗೆ ಸಂಬಂಧಿಸಿದ ಯಾವುದೇ ನಿವೇಶನ ಅಥವಾ ಸ್ವತ್ತುಗಳನ್ನು ಭೂಸ್ವಾಧಿನಕ್ಕೆ ಒಳಪಟ್ಟಿರುವ ಮತ್ತು ಭೂಸ್ವಾಧಿನಕ್ಕೆ ಒಳಪಡದೆ ಇರುವ ಯಾವುದೇ ರೀತಿಯ/ರೂಪದ ಸ್ವತ್ತುಗಳನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ರವರಿಂದ ಪೂರ್ವಾನುಮತಿ (NOC) ಪಡೆಯದೇ ಯಾವುದೇ ದಸ್ತಾವೇಜುಗಳನ್ನು ನೋಂದಾಯಿಸದೇ ಇರಲು ಸೂಚಿಸಿದೆ. ಸದರಿ ಸೂಚನೆಯು ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

ತಪ್ಪಿದಲ್ಲಿ ಅಂತಹ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲಾಗುವುದು ಮತ್ತು ಮುಂದಿನ ಪರಿಣಾಮಗಳಿಗೆ ನೀವೇ ನೇರ ಮತ್ತು ವೈಯಕ್ತಿಕ ಜವಬ್ದಾರರಾಗಿರುತ್ತೀರಿ.

30/8/21

ನೋಂದಣಿ ಮಹಾಪರಿವೀಕ್ಷಕರು ಮತ್ತು
ಮುದ್ರಾಂಕಗಳ ಆಯುಕ್ತರು
ಬೆಂಗಳೂರು.

ಇವರಿಗೆ,

ರಾಜ್ಯದ ಎಲ್ಲಾ ಉಪನೋಂದಣಾಧಿಕಾರಿಗಳಿಗೆ, ಜಿಲ್ಲಾನೋಂದಣಾಧಿಕಾರಿಗಳ ಮುಖಾಂತರ.

ಪ್ರತಿಯನ್ನು,

1. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.
2. ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಟಿ.ಚೌಡಯ್ಯ ರಸ್ತೆ, ಕುಮಾರ ಪಾರ್ಕ್ ಪಶ್ಚಿಮ, ಬೆಂಗಳೂರು-560020.